ಹೊಸ ಕ್ರಿಯ

# ಕರ್ನಾಟಕ ವಿಧಾನ ಪರಿಷತ್

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2522 |
| ಮಾನ್ಯ ಸದಸ್ಯರ ಹೆಸರು | ಶ್ರೀ ಎಸ್. ಅಪ್ಪಾಜಿಗೌಡ |
| ಉತ್ತರಿಸಬೇಕಾದ ದಿನಾಂಕ | 31.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಎಷ್ಟು ವಿದ್ಯಾರ್ಥಿನಿಲಯಗಳನ್ನು ನಡೆಸಲಾಗುತ್ತಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ 1301 ಮೆಟ್ರಿಕ್-ಪೂರ್ವ ಹಾಗೂ 1137 ಮೆಟ್ರಿಕ್-ನಂತರದ ಹೀಗೆ ಒಟ್ಟು 2438 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ಒಟ್ಟು 192736 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶದ ಸೌಲಭ್ಯವನ್ನು ಕಲ್ಪಿಸಲಾಗಿರುತ್ತದೆ.<br>ಜಿಲ್ಲಾವಾರು ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ) | ವಿದ್ಯಾರ್ಥಿನಿಲಯಗಳಿಗೆ ಹೆಚ್ಚಿನ ಬೇಡಿಕೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಹಾಗಿದ್ದಲ್ಲಿ, ಹೊಸದಾಗಿ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವ ಬಗ್ಗೆ ಸರ್ಕಾರದ ನಿಲುವೇನು; | ಹೌದು.<br>ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಆಯಾ ಆರ್ಥಿಕ ವರ್ಷದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆಯನ್ನು ಆಧರಿಸಿರುತ್ತದೆ. |
| ಇ) | ನಿಗದಿತ ಪ್ರಮಾಣದ ಗುರಿಗಿಂತ ಹೆಚ್ಚಿನ ಅರ್ಜಿಗಳು ರಾಜ್ಯದ್ಯಾಂತ ಸ್ವೀಕೃತವಾಗಿದ್ದು, ಈ ಬಗ್ಗೆ ವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸಲು ಸರ್ಕಾರದಿಂದ ಯಾವ ಕ್ರಮತೆಗೆದುಕೊಳ್ಳಲಾಗುವುದು. | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್-ಪೂರ್ವ ಮತ್ತು ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ನಿಗಧಿಪಡಿಸಿರುವ ಮಂಜೂರಾತಿ ಸಂಖ್ಯೆಗನುಗುಣವಾಗಿ ಪ್ರವೇಶ ನಿಯಮಗಳನುಸಾರ ಪ್ರವರ್ಗವಾರು ಅರ್ಹ ವಿದ್ಯಾರ್ಥಿಗಳಿಗೆ ದಾಖಲಾತಿಯನ್ನು ಕಲ್ಪಿಸಲಾಗುತ್ತಿದೆ.<br><br>ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಹೆಚ್ಚಿನ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸುವ ದೃಷ್ಟಿಯಿಂದ ಸರ್ಕಾರದ ಆದೇಶ ಸಂಖ್ಯೆ:ಹಿಂವ ಕ 352 ಬಿಎಂಎಸ್ 2019, ದಿನಾಂಕ:21.01.2020 ರಲ್ಲಿ ರಾಜ್ಯದ ವಿವಿಧ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಸಂಖ್ಯಾಬಲ ಹೆಚ್ಚಳ ಮಾಡಲಾಗಿದ್ದು, ಒಟ್ಟಾರೆ 332 ಮೆಟ್ರಿಕ್-ನಂತರದ ಬಾಲಕರ ಮತ್ತು ಬಾಲಕಿಯರ ವಿದ್ಯಾರ್ಥಿನಿಲಯಗಳಲ್ಲಿ 5180 ಸಂಖ್ಯಾಬಲವನ್ನು ಹೆಚ್ಚಳ ಮಾಡಲಾಗಿರುತ್ತದೆ.<br><br>ಪ್ರಸ್ತುತ, 2020-21ನೇ ಸಾಲಿನಲ್ಲಿಯೂ ಸಹ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳ ಒಟ್ಟು ಸಂಖ್ಯಾಬಲದಲ್ಲಿ ಶೇ.5 ರಷ್ಟು ಸಂಖ್ಯಾಬಲ ಹೆಚ್ಚಳ ಮಾಡುವಂತೆ ಕೋರಿ ಪ್ರಸ್ತಾಪಿಸಲಾಗಿರುತ್ತದೆ. ಹಾಗೂ ಈ ಸಂಬಂಧ 2021-22ನೇ ಸಾಲಿನ ಆಯವ್ಯಯ ಭಾಷಣದಲ್ಲಿ 5000 ವಿದ್ಯಾರ್ಥಿಗಳ ಸಂಖ್ಯಾಬಲ ಹೆಚ್ಚಳಕ್ಕೆ ಘೋಷಣೆ ಮಾಡಲಾಗಿರುತ್ತದೆ. |

| | | |
|---|---|---|
| | | ಮುಂದುವರೆದು, ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿ, ಪ್ರವೇಶ ದೊರಕದ ಅರ್ಹ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಪರ್ಯಾಯವಾಗಿ ವಿದ್ಯಾಸಿರಿ-ಊಟ ಮತ್ತು ವಸತಿ ಸಹಾಯ ಯೋಜನೆಯಡಿ ಅನುದಾನದ ಲಭ್ಯತೆಯನುಸಾರ 10 ತಿಂಗಳ ಅವಧಿಗೆ ಪ್ರತಿ ವಿದ್ಯಾರ್ಥಿಗೆ ರೂ.15,000/-ಗಳನ್ನು ಮಂಜೂರು ಮಾಡಲಾಗುತ್ತಿದೆ. |

ಸಂಖ್ಯೆ:ಹಿಂವಕ 291 ಬಿಎಂಎಸ್ 2021

**(ಕೋಟ ಶ್ರೀನಿವಾಸ ಪೂಜಾರಿ)**
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

ವಿಧಾನ ಪರಿಷತ್ ಸದಸ್ಯರಾದ ಶ್ರೀ ಎನ್.ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ.2522ಕ್ಕೆ

ಅನುಬಂಧ

ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳ ವಿವರ

| ಕ್ರ. ಸಂ. | ಜಿಲ್ಲೆಯ ಹೆಸರು | ಮೆಟ್ರಿಕ್-ಪೂರ್ವ | | ಮೆಟ್ರಿಕ್-ನಂತರ | | ಒಟ್ಟು | |
|---|---|---|---|---|---|---|---|
| | | ನಿಲಯಗಳ ಸಂಖ್ಯೆ | ಮಂಜೂರಾತಿ ಸಂಖ್ಯೆ | ನಿಲಯಗಳ ಸಂಖ್ಯೆ | ಮಂಜೂರಾತಿ ಸಂಖ್ಯೆ | ನಿಲಯಗಳ ಸಂಖ್ಯೆ | ಮಂಜೂರಾತಿ ಸಂಖ್ಯೆ |
| 1 | ಬಾಗಲಕೋಟೆ | 43 | 2840 | 39 | 4410 | 82 | 7250 |
| 2 | ಬಳ್ಳಾರಿ | 59 | 3930 | 56 | 6075 | 115 | 10005 |
| 3 | ಬೆಳಗಾವಿ | 100 | 5250 | 56 | 6050 | 156 | 11300 |
| 4 | ಬೆಂಗಳೂರು (ಗ್ರಾ) | 18 | 775 | 14 | 1400 | 32 | 2175 |
| 5 | ಬೆಂಗಳೂರು ನಗರ | 4 | 165 | 47 | 4900 | 51 | 5065 |
| 6 | ಬೀದರ್ | 45 | 2467 | 32 | 3530 | 77 | 5997 |
| 7 | ಚಾಮರಾಜನಗರ | 12 | 530 | 19 | 1990 | 31 | 2520 |
| 8 | ಚಿಕ್ಕಬಳ್ಳಾಪುರ | 32 | 1675 | 26 | 2810 | 58 | 4485 |
| 9 | ಚಿಕ್ಕಮಗಳೂರು | 59 | 3105 | 41 | 4515 | 100 | 7620 |
| 10 | ಚಿತ್ರದುರ್ಗ | 45 | 2380 | 56 | 5885 | 101 | 8265 |
| 11 | ದಕ್ಷಿಣ ಕನ್ನಡ | 24 | 1155 | 49 | 5120 | 73 | 6275 |
| 12 | ದಾವಣಗೆರೆ | 36 | 1915 | 44 | 4665 | 80 | 6580 |
| 13 | ಧಾರವಾಡ | 26 | 1245 | 41 | 4425 | 67 | 5670 |
| 14 | ಗದಗ್ | 34 | 1923 | 28 | 3075 | 62 | 4998 |
| 15 | ಹಾಸನ | 66 | 3390 | 50 | 5435 | 116 | 8825 |
| 16 | ಹಾವೇರಿ | 46 | 2445 | 29 | 3195 | 75 | 5640 |
| 17 | ಕಲಬುರಗಿ | 73 | 3930 | 55 | 5710 | 128 | 9640 |
| 18 | ಕೊಡಗು | 19 | 755 | 19 | 1900 | 38 | 2655 |
| 19 | ಕೋಲಾರ | 29 | 1451 | 31 | 3100 | 60 | 4551 |
| 20 | ಕೊಪ್ಪಳ | 42 | 2670 | 25 | 3000 | 67 | 5670 |
| 21 | ಮಂಡ್ಯ | 65 | 3475 | 44 | 4990 | 109 | 8465 |
| 22 | ಮೈಸೂರು | 43 | 1880 | 49 | 5433 | 92 | 7313 |
| 23 | ರಾಯಚೂರು | 38 | 2140 | 30 | 3325 | 68 | 5465 |
| 24 | ರಾಮನಗರ | 26 | 1113 | 21 | 2175 | 47 | 3288 |
| 25 | ಶಿವಮೊಗ್ಗ | 60 | 3221 | 72 | 8120 | 132 | 11341 |
| 26 | ತುಮಕೂರು | 63 | 3315 | 50 | 5477 | 113 | 8792 |
| 27 | ಉಡುಪಿ | 18 | 990 | 23 | 2515 | 41 | 3505 |
| 28 | ಉತ್ತರ ಕನ್ನಡ | 68 | 3826 | 33 | 3455 | 101 | 7281 |
| 29 | ವಿಜಯಪುರ | 64 | 3610 | 37 | 3900 | 101 | 7510 |
| 30 | ಯಾದಗಿರಿ | 44 | 2390 | 21 | 2200 | 65 | 4590 |
| | ಒಟ್ಟು | **1301** | **69956** | **1137** | **122780** | **2438** | **192736** |